


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ಗುರುತಿನ ಪ್ರಶ್ನೆ

ದಿನಾಂಕ : 25-03-2021 ಪ್ರಶ್ನೆ ಸಂಖ್ಯೆ : 288 (2131)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ.ಗೋವಿಂದರಾಜ್ (ವಿಧಾನಸಭೆಯಿಂದ ಚುನಾಯಿತರಾದವರು )

ಉತ್ತರ ನೀಡಬೇಕಾದ ದಿನಾಂಕ : 25-03-2021

ಉತ್ತರಿಸುವ ಸಚಿವರು : ಯುವ ಸಬಲೀಕರಣ ಮತ್ತು ಕ್ರೀಡೆ ಹಾಗೂ ಯೋಜನಾ ಸಚಿವರು

ವಿಷಯ : ಬೆಂಗಳೂರಿನ ಜಕ್ಕೂರು ಏರೋಡ್ರಂನ ಬಗ್ಗೆ

(ಅ) ಬೆಂಗಳೂರಿನ ಜಕ್ಕೂರು ಏರೋಡ್ರಂನ ಒಟ್ಟು ವಿಸ್ತೀರ್ಣವೆಷ್ಟು; ಈ ಜಾಗದಲ್ಲಿ ಒತ್ತುವರಿ ಏನಾದರೂ ಆಗಿದೆಯೇ; ಹೆಚ್ಚುವರಿ ಜಾಗದ ಅವಶ್ಯಕತೆ ಎಷ್ಟು; (ವಿವರಗಳನ್ನು ಒದಗಿಸುವುದು)

(ಆ) ಪ್ರಸ್ತುತ ಸರ್ಕಾರಿ ವೈಮಾನಿಕ ತರಬೇತಿ ಶಾಲೆ ಕಾರ್ಯನಿರ್ವಹಿಸುತ್ತಿದೆಯೇ; ಇಲ್ಲದಿದ್ದಲ್ಲಿ, ಅದಕ್ಕೆ ಕಾರಣಗಳೇನು; ಕಾರ್ಯನಿರ್ವಹಿಸಲು ಏನು ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ; (ವಿವರಗಳನ್ನು ಒದಗಿಸುವುದು)

(ಇ) ಪೈಲಟ್ ಕೋರ್ಸ್ ಪ್ರವೇಶಕ್ಕೆ ಇರುವ ಮಾನದಂಡಗಳೇನು; ಅದರ ಶುಲ್ಕ ಎಷ್ಟು; ಇದುವರೆವಿಗೆ ಎಷ್ಟು ಪೈಲಟ್‌ಗಳಿಗೆ ತರಬೇತಿ ನೀಡಲಾಗಿದೆ; (ವರ್ಷವಾರು ವಿವರಗಳನ್ನು ಒದಗಿಸುವುದು)

(ಈ) ಪೈಲಟ್ ತರಬೇತಿಗಾಗಿ ಖರೀದಿಸಲಾದ ವಿಮಾನಗಳು ಎಷ್ಟು; ಅವುಗಳ ನಮೂನೆ, ಸಾಮರ್ಥ್ಯ ಹಾಗೂ ದರಗಳು ಎಷ್ಟು; ಇವುಗಳಲ್ಲಿ ಎಲ್ಲಾ ವಿಮಾನಗಳು ಕಾರ್ಯನಿರ್ವಹಿಸುತ್ತಿವೆಯೇ; (ವಿವರಗಳನ್ನು ಒದಗಿಸುವುದು)

(ಉ) ಸರ್ಕಾರಿ ವೈಮಾನಿಕ ತರಬೇತಿ ಶಾಲೆಯ ಒಟ್ಟು ಸಿಬ್ಬಂದಿ (ಪೈಲಟ್‌ಗಳೂ ಸೇರಿದಂತೆ) ಎಷ್ಟು; ಖಾಲಿ ಇರುವ ಹುದ್ದೆಗಳು ಎಷ್ಟು; ಈ ಶಾಲೆ ತಾಂತ್ರಿಕವಾಗಿ ಆಧುನಿಕ ಯುಗಕ್ಕೆ ತಕ್ಕಂತೆ ಸಮರ್ಪಕ ಹಾಗೂ ಗುಣಮಟ್ಟದ ಮೂಲಭೂತ ಸೌಲಭ್ಯ ಹಾಗೂ ಬೋಧಕ ವರ್ಗ ಹೊಂದಿದೆಯೇ; ಈ ಶಾಲೆಯಲ್ಲಿ ಡ್ರೋಣ್ ತರಬೇತಿಯನ್ನು ನೀಡಲಾಗುತ್ತಿದೆಯೇ; (ವಿವರಗಳನ್ನು ಒದಗಿಸುವುದು)

(ಊ) ಜಕ್ಕೂರು ಏರೋಡ್ರಂನಲ್ಲಿ ವಿಮಾನಗಳನ್ನು ನಿರ್ವಹಿಸುವ ಕಟ್ಟಡ (ಊಚಿಟಿgeಡಿs) ಗಳಿವೆಯೇ; ಅವುಗಳ ನಿರ್ವಹಣೆಯನ್ನು ಸರ್ಕಾರ ಯಾರಿಗೆ ವಹಿಸಿದೆ: (ಸಂಪೂರ್ಣ ವಿವರ ಒದಗಿಸುವುದು)

(ಋ) ಈ ಸರ್ಕಾರಿ ವೈಮಾನಿಕ ತರಬೇತಿ ಶಾಲೆಯನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿದೆಯೇ?